# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಕೆ.ಸಿ ಕೊಂಡಯ್ಯ ಮತ್ತು
ಶ್ರೀ ಆರ್. ಧರ್ಮಸೇನ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1066+1113

ಉತ್ತರಿಸಬೇಕಾದ ದಿನಾಂಕ : 29.09.2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ವಿವಿಧ ಡಿ.ಸಿ.ಸಿ ಬ್ಯಾಂಕ್‌ಗಳು ಮತ್ತು ಸಹಕಾರ ಬ್ಯಾಂಕ್‌ಗಳಲ್ಲಿ ನಡೆದಿರುವ ಹಣಕಾಸಿನ ಹಗರಣಗಳ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಆ ಬ್ಯಾಂಕುಗಳು ಯಾವುವು: (ಕಳೆದ 2 ವರ್ಷಗಳ ಬ್ಯಾಂಕ್ ಮಾಹಿತಿ ನೀಡುವುದು) | ರಾಜ್ಯದಲ್ಲಿ ಸಹಕಾರ ಸಂಘಗಳ ಕಾಯ್ದೆಯಡಿ ನೋಂದಣಿಗೊಂಡು ಕಾರ್ಯನಿರ್ವಹಿಸುತ್ತಿರುವ 02 ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು 01 ಪಟ್ಟಣ ಸಹಕಾರ ಬ್ಯಾಂಕುಗಳಲ್ಲಿ ಕಳೆದ 2 ವರ್ಷಗಳಲ್ಲಿ ಹಣಕಾಸಿನ ಹಗರಣವಾಗಿರುವುದು ಕಂಡು ಬಂದಿದ್ದು, ಅವುಗಳ ವಿವರ ಕೆಳಕಂಡಂತಿದೆ.<br>1. ಶಿವಮೊಗ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಶಿವಮೊಗ್ಗ<br>2. ಮೈಸೂರು ಚಾಮರಾಜನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಚಾಮರಾಜನಗರ<br>3. ಶ್ರೀ ಗುರು ರಾಘವೇಂದ್ರ ಸಹಕಾರ ಬ್ಯಾಂಕ್ ನಿ, ಬೆಂಗಳೂರು |
| ಆ. | ಈ ಬ್ಯಾಂಕುಗಳಲ್ಲಿ ಎಷ್ಟು ಜನ ಫಿಕ್ಸೆಡ್ ಡೆಪಾಸಿಟ್ ಮಾಡಿದ್ದು, ಮದುವೆ ಮುಂತಾದ ಸಮಾರಂಭಗಳಿಗೆ ಹಣ ವಾಪಸ್ ಪಡೆಯಲು ಸಾಧ್ಯವಾಗದೆ ಪ್ರತಿಭಟನೆಗಳನ್ನು ಮಾಡುತ್ತಿದ್ದು ಗ್ರಾಹಕರ ಹಿತರಕ್ಷಣೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ: | ಈ ಬ್ಯಾಂಕುಗಳ ಪೈಕಿ ಶ್ರೀ ಗುರು ರಾಘವೇಂದ್ರ ಸಹಕಾರ ಬ್ಯಾಂಕಿನಲ್ಲಿ ವಿವಿಧ ಠೇವಣಿಗಳಲ್ಲಿ ಒಟ್ಟು 40661 ಜನ ರೂ.2310.36 ಕೋಟಿ ಠೇವಣಿ ಇರಿಸಿದ್ದು, ಬ್ಯಾಂಕಿನಲ್ಲಿ ಹಣಕಾಸಿನ ಹಗರಣವಾಗಿರುವುದರಿಂದ ಸಾರ್ವಜನಿಕರ ಅಗತ್ಯತೆಗನುಗುಣವಾಗಿ ಠೇವಣಿಗಳನ್ನು ಹಿಂತಿರುಗಿಸಲು ಸಾಧ್ಯವಾಗದೇ ಸಾರ್ವಜನಿಕರಿಗೆ ತೊಂದರೆ ಉಂಟಾಗಿರುತ್ತದೆ. ಅವರುಗಳ ಹಣವನ್ನು ಕಾನೂನು ಚೌಕಟ್ಟಿನಲ್ಲಿ ಮರುಪಾವತಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ. | ಅಕ್ರಮಗಳನ್ನು ನಡೆಸಿರುವ ಸಹಕಾರಿ ಬ್ಯಾಂಕುಗಳ ಮೇಲೆ ಯಾವ ರೀತಿಯ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ? | ಅಕ್ರಮಗಳನ್ನು ನಡೆಸಿರುವ ಸಹಕಾರ ಬ್ಯಾಂಕುಗಳ ಮೇಲೆ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>**1. ಶಿವಮೊಗ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಶಿವಮೊಗ್ಗ:**<br>ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಶಿವಮೊಗ್ಗ ಈ ಬ್ಯಾಂಕಿನ ನಗರ ಶಾಖೆಯಲ್ಲಿ ಚಿನ್ನಾಭರಣ ಸಾಲ ನೀಡಿಕೆಯಲ್ಲಿ ಅವ್ಯವಹಾರವಾಗಿದ್ದು, ಈ ಸಂಬಂಧಿಸಿದಂತೆ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 65 ರಡಿ ಶಾಸನಬದ್ಧ ಪರಿವೀಕ್ಷಣೆ ನಡೆಸಿ ಆರೋಪ ಸಾಬೀತಾದ ಹಿನ್ನೆಲೆಯಲ್ಲಿ ಕಲಂ 68 ರ ನಿರ್ದೇಶನ ನೀಡಲಾಗಿದೆ ಮತ್ತು ನಷ್ಟ ವಸೂಲಾತಿಗಾಗಿ ಕಲಂ 70 ರಡಿ ದಾವೆಗಳು ದಾಖಲಾಗಿದ್ದು ಬ್ಯಾಂಕಿಗೆ ಆಗಿರುವ ನಷ್ಟವನ್ನು ವಸೂಲಾತಿಗೆ ಅಮಲ್ಜಾರಿ ಪ್ರಕರಣ ಜಾರಿಯಲ್ಲಿರುತ್ತದೆ. ಬ್ಯಾಂಕಿನ ಅಧ್ಯಕ್ಷರನ್ನು ದಿನಾಂಕ 25-08- |
| | | 2014 ರಂದು ಅನರ್ಹತೆಗೊಳಿಸಲಾಗಿದೆ ಹಾಗೂ 07 ಜನ ನಿರ್ದೇಶಕರನ್ನು ಕಲಂ 29-ಸಿ ರಡಿ ಅನರ್ಹತೆಗೊಳಿಸಲಾಗಿದ್ದು, ಈ ಆದೇಶಕ್ಕೆ ಗೌರವ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ 63355-63359/2016 ರಲ್ಲಿ ದಿನಾಂಕ:14-02-2016 ರಂದು ತಡೆಯಾಜ್ಞೆ ಹೊರಡಿಸಿರುತ್ತದೆ ಹಾಗೂ ರಿಟ್ ಅರ್ಜಿ ಪ್ರಕರಣ ಸಂಖ್ಯೆ 21342/2017 ರಲ್ಲಿ ನಿರ್ದೇಶಕರಾದ ಶ್ರೀ ಶ್ರೀಪಾದರಾವ್ ರವರ ಅನರ್ಹತಾ ಪ್ರಕರಣಕ್ಕೂ ಸಹ ತಡೆಯಾಜ್ಞೆ ಇರುತ್ತದೆ. ಮುಂದುವರೆದು ಕಲಂ 68 ರ ನಿರ್ದೇಶನ ಪಾಲನೆ ಮಾಡದ ಬ್ಯಾಂಕಿನ ಅಧ್ಯಕ್ಷರನ್ನು |

94(1066+1113)

| | | |
|---|---|---|
| | | ಕಲಂ 29–ಸಿ ರಡಿ ದಿನಾಂಕ 14–07–2020 ರಂದು ಅನರ್ಹತೆಗೊಳಿಸಿದ್ದು, ಈ ಪ್ರಕರಣವು ರಿಟ್ ಅರ್ಜಿ ಸಂಖ್ಯೆ 8891/2020 ರಲ್ಲಿ ಪ್ರಶ್ನಿತವಾಗಿದ್ದು ಪ್ರಕರಣವನ್ನು ಮರುವಿಚಾರಣೆ ಮಾಡುವಂತೆ ದಿನಾಂಕ 14–08–2020 ರಂದು ಗೌರವ ಉಚ್ಚ ನ್ಯಾಯಾಲಯವು ಆದೇಶಿಸಿದ್ದು, ಮರುವಿಚಾರಣೆಯನ್ನು ಗೌರವ ಉಚ್ಚ ನ್ಯಾಯಾಲಯದ ಆದೇಶದ ಮೇರೆಗೆ ಶ್ರೀ ಇಲ್ಯಾಸ್‌ಉಲ್ಲಾ ಷರೀಫ್, ಸಹಕಾರ ಸಂಘಗಳ ಜಂಟಿ ನಿಬಂಧಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸಹಕಾರ ಬ್ಯಾಂಕ್ ನಿ, ಚಿತ್ರದುರ್ಗ ರವರು ವಿಚಾರಣೆ ನಡೆಸುತ್ತಿದ್ದಾರೆ ಹಾಗೂ ಸದರಿ ಬ್ಯಾಂಕಿನ ವಿರುದ್ಧ 03 ಖಾಸಗಿ ಸಕ್ಕರೆ ಕಾರ್ಖಾನೆಗಳಿಗೆ ಕಾನೂನು ಬಾಹಿರವಾಗಿ ಸಾಲ ನೀಡಿರುವ ಆರೋಪ ಹಾಗೂ ಇನ್ನಿತರೆ ಆರೋಪಗಳ ಮೇಲೆ ಪರಿಶೀಲನೆ ಮಾಡಲು ಕಲಂ 65 ರಡಿ ಪರಿವೀಕ್ಷಣೆಗೆ ಆದೇಶ ಮಾಡಲಾಗಿದೆ. ಪ್ರಸ್ತುತ ಪರಿವೀಕ್ಷಣೆ ಪ್ರಗತಿಯಲ್ಲಿದೆ.<br>**2. ಮೈಸೂರು ಚಾಮರಾಜನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಮೈಸೂರು:**<br>ಮೈಸೂರು ಚಾಮರಾಜನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಮೈಸೂರು ಇದರಲ್ಲಿ ರೈತರಿಗೆ ಸಾಲ ಹಂಚಿಕೆಯಲ್ಲಿ ಅವ್ಯವಹಾರ ನಡೆದಿರುವ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ವಿಚಾರಣೆ ನಡೆಸಿ ವಿಚಾರಣಾ ವರದಿ ಆಧಾರದ ಮೇಲೆ ಕಾಯ್ದೆ ಕಲಂ 68 ರ ಆದೇಶ ಹೊರಡಿಸಿ ಕ್ರಮ ಕೈಗೊಳ್ಳಲು ಸೂಚನೆಗಳನ್ನು ನೀಡಲಾಗಿರುತ್ತದೆ.<br>**3. ಶ್ರೀ ಗುರು ರಾಘವೇಂದ್ರ ಪಟ್ಟಣ ಸಹಕಾರ ಬ್ಯಾಂಕ್ ನಿ., ಬೆಂಗಳೂರು:**<br>ಈ ಬ್ಯಾಂಕಿನ ನಿರ್ದೇಶಕರುಗಳು ಸ್ವಂತ ಹಿತಾಸಕ್ತಿಯಿಂದ ಬ್ಯಾಂಕಿನ ಹಣವನ್ನು ಬೇರೆ ಬೇರೆ ಮೂಲಗಳಲ್ಲಿ ತೊಡಗಿಸಿ ಬ್ಯಾಂಕಿಗೆ ನಷ್ಟವನ್ನು ಅನುಭವಿಸಲು ಕಾರಣರಾಗಿರುತ್ತಾರೆ.<br>ಅ) ಭಾರತೀಯ ರಿಸರ್ವ್ ಬ್ಯಾಂಕಿನ ಸಲಹೆ ಮೇರೆಗೆ ದಿನಾಂಕ 18–05–2020 ರಲ್ಲಿ ಬ್ಯಾಂಕಿನ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 30(6)ರಡಿಯಲ್ಲಿ ಆಡಳಿತಾಧಿಕಾರಿಯನ್ನು ಒಂದು ವರ್ಷದ ಅವಧಿಗೆ ನೇಮಿಸಲಾಗಿದೆ. ಆಡಳಿತಾಧಿಕಾರಿಗಳು ಪ್ರಭಾರ ವಹಿಸಿಕೊಂಡು ಬ್ಯಾಂಕಿನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದಾರೆ.<br>ಆ) ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 64 ರ ವಿಚಾರಣೆಗೆ ಆದೇಶಿಸಲಾಗಿದೆ.<br>ಇ) 2014 ರಿಂದ 2019 ರವರೆಗಿನ ಸಾಲುಗಳ ಮರು ಲೆಕ್ಕ ಪರಿಶೋಧನೆಗೆ ಆದೇಶಿಸಲಾಗಿದೆ.<br>ಈ) ಜಾರಿ ನಿರ್ದೇಶನಾಲಯದಿಂದ ತನಿಖೆ ನಡೆಯುತ್ತಿದೆ<br>ಉ) ಸಿ.ಐ.ಡಿ ತನಿಖೆ ನಡೆಯುತ್ತಿದೆ. |
| | | ಊ) ಸಂಬಂಧಿಸಿದವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗಿದೆ. |

**ಸಂಖ್ಯೆ: ಸಿಒ 86 ಸಿಸಿಬಿ 2020**

ಎಸ್.ಟಿ. ಸೋಮಶೇಖರ್

(ಎಸ್.ಟಿ. ಸೋಮಶೇಖರ್)

**ಸಹಕಾರ ಸಚಿವರು**